# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 107(70)

ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 13-12-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರವು ಯಾವ ಸಾಲಿನ ವರಗಿನ ಖಾಸಗಿ ಕನ್ನಡ ಮಾಧ್ಯಮ ಶಾಲಾ-ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಿದೆಯೇ; | 01.06.1987 ರಿಂದ 1994-95ನೇ ಅವಧಿಯಲ್ಲಿ, ಕನ್ನಡ ಮಾಧ್ಯಮದಲ್ಲಿ ಪ್ರಾರಂಭಿಸಿ ವಿಚ್ಛಿನ್ನತೆ ಇಲ್ಲದೇ ಸತತವಾಗಿ ನಡೆದು ಕೊಂಡು ಬಂದ ಶಾಲೆಗಳನ್ನು ವೇತನಾನುದಾನಕ್ಕೊಳಪಡಿಸಲು ಕ್ರಮವಹಿಸಲಾಗಿದೆ. |
| ಆ. | 1995ರ ನಂತರ ಆರಂಭಗೊಂಡ ಶಾಲಾ-ಕಾಲೇಜುಗಳ ವೇತನಾನುದಾನಕ್ಕೆ ಒಳಪಡಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೆ; | 1995ರ ನಂತರ ಆರಂಭವಾದ ಅನುದಾನ ರಹಿತ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂಬಂಧ ಹಿಂದಿನ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ, ಮಾನ್ಯ ವಿಧಾನ ಪರಿಷತ್ ಸದಸ್ಯರು ಹಾಗೂ ಹಾಲಿ ಸಭಾಪತಿ ರವರ ಸಮ್ಮುಖದಲ್ಲಿ ಏರ್ಪಡಿಸಲಾಗಿದ್ದ ಸಭೆಯಲ್ಲಿ, ಸದರಿ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂಬಂಧ 1995 ರಿಂದ 2019 ರವರೆಗೆ ಪ್ರತಿ 05 ವರ್ಷದ ಬ್ಲಾಕ್ ಅವಧಿಯಲ್ಲಿ ಪ್ರಾರಂಭಿಸಲಾಗಿರುವ ಶಾಲಾ ಕಾಲೇಜುಗಳಲ್ಲಿ ಎಷ್ಟು ಶಿಕ್ಷಕರು / ಉಪನ್ಯಾಸಕರುಗಳು / ಬೋಧಕೇತರುಗಳು ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಇವರುಗಳನ್ನು ಅನುದಾನಕ್ಕೆ ಒಳಪಡಿಸಿದ್ದಲ್ಲಿ ವಾರ್ಷಿಕವಾಗಿ ತಗಲುವ ಅಂದಾಜು ವೆಚ್ಚದ ಮಾಹಿತಿಯನ್ನು ಆಯುಕ್ತಾಲಯಗಳು ಮತ್ತು ಪದವಿ ಪೂರ್ವ ನಿರ್ದೇಶನಾಲಯದಿಂದ ಪಡೆದು ಪರಿಶೀಲಿಸಲಾಗುತ್ತಿದೆ.<br>(ವಿವರವನ್ನು ಅನುಬಂಧದಲ್ಲಿರಿಸಿದೆ) |
| ಇ. | ಹಾಗಿದ್ದಲ್ಲಿ ಯಾವ ಸಾಲಿನ ವರಗಿನ ಶಾಲಾ-ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲಾಗುವುದು?(ವಿವರ ನೀಡುವುದು) | |

ಇಪಿ 257 ಪಿಎಂಸಿ 2021

[ಬಿ.ಸಿ. ನಾಗೇಶ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

ಸಲ್ಲಿಸಿದೆ.

ಮಾನ್ಯ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಟಿಪ್ಪಣಿ ಸಂಖ್ಯೆ: ಅಆಶಾ:ಮಾ.ಸ.ಕು:2019–20, ದಿನಾಂಕ: 16.01.2020ರ ಅನ್ವಯ 1995 ನಂತರ ಪ್ರಾರಂಭಗೊಂಡ ಕನ್ನಡ ಮಾಧ್ಯಮ ಅನುದಾನ ರಹಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳನ್ನು ಅನುದಾನಕ್ಕೆ ಒಳಪಡಿಸುವ ಸಂಬಂಧ ತಗಲಬಹುದಾದ ಆರ್ಥಿಕ ವೆಚ್ಚದ ವಿವರವನ್ನು ಸಲ್ಲಿಸಲು ನಿರ್ದೇಶಿಸಿರುವಂತೆ ಈ ಕೆಳಕಂಡ ಅಂಶಗಳನ್ನು ಅವಗಾಹನೆಗೆ ಸಲ್ಲಿಸಿದೆ

- ವಿದ್ಯಾರ್ಥಿಗಳ ಸಾಧನ ಜಾಡೀಕರಣ ವ್ಯವಸ್ಥೆ (Students Achievement Tracking System-SATS)ನಲ್ಲಿ 2019–20ನೇ ಸಾಲಿನಲ್ಲಿ ಇಂದೀಕರಿಸಲಾಗಿರುವ ಮಾಹಿತಿಯನ್ನು ಪರಿಶೀಲಿಸಲಾಗಿದೆ. ಸದರಿ ಮಾಹಿತಿ ಅನ್ವಯ ಈ ಕೆಳಕಂಡಂತೆ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ 1995–96 ರಿಂದ 2000 ರವರೆಗೆ, 2001 ರಿಂದ 2005ರ ವರೆಗೆ, 2006 ರಿಂದ 2010ರ ವರೆಗೆ, 2011 ರಿಂದ 2015ರ ವರೆಗೆ ಮತ್ತು 2016 ರಿಂದ ಡಿಸೆಂಬರ್–19ರ ವರೆಗಿನ ಅವಧಿಯಲ್ಲಿ ಪ್ರಾರಂಭವಾದ ಶಾಲೆಗಳ ವಿವರಗಳು ಈ ಕೆಳಕಂಡಂತಿರುತ್ತದೆ.

| Sl No. | Year | Type of Schools | | | | |
|---|---|---|---|---|---|---|
| | | No. of Primary and Upper Primary schools | No. of Primary teachers | No. of Upper Primary teachers | No. of Secondary Schools | No. of teachers |
| 1) | 1995- 2000 | 685 | 1188 | 1462 | 211 | 1541 |
| 2) | 2001-2005 | 708 | 1150 | 1198 | 121 | 1224 |
| 3) | 2006-2010 | 730 | 1194 | 1068 | 130 | 1073 |
| 4) | 2011-2015 | 951 | 1490 | 812 | 93 | 1227 |
| 5) | 2016- Dec-2019 | 3338 | 5956 | 4138 | 434 | 6966 |
| | **Total** | 6412 | 10978 | 8678 | **989** | **12031** |

ಮೇಲೆ ನಮೂದಿಸಿರುವಂತೆ ಕ್ರಮ ಸಂಖ್ಯೆ 1 ರಿಂದ 5ರ ವರೆಗಿನ ವರ್ಷಗಳಲ್ಲಿ ಪ್ರಾರಂಭಗೊಂಡು ಅನುದಾನ ರಹಿತ ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ಇರುತ್ತವೆ.

**ಪ್ರಾಥಮಿಕ ಶಾಲೆಗಳಿಗೆ ಶಿಕ್ಷಕರ ಲೆಕ್ಕಾಚಾರ ಈ ಕೆಳಕಂಡಂತೆ ಪರಿಗಣಿಸಿದೆ.**

1) ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ 1 ರಿಂದ 5ನೇ ತರಗತಿಯಲ್ಲಿನ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ 2 ಶಿಕ್ಷಕರನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.
2) ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ 6 ರಿಂದ 8ನೇ ತರಗತಿಯಲ್ಲಿನ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ 2 ಶಿಕ್ಷಕರನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.
3) 1 ರಿಂದ 7ನೇ ತರಗತಿಯ ಶಾಲೆಗಳಿಗೆ ಕನಿಷ್ಠ 4 ಶಿಕ್ಷಕರನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಕ್ರಮ ಸಂಖ್ಯೆ 1 ರಿಂದ 3ರ ವರೆಗಿನ ಸಂಖ್ಯೆಗಳನ್ನಾಧರಿಸಿ 1995 ರಿಂದ 2019ರವರೆಗೆ ಕನ್ನಡ ಮಾಧ್ಯಮದಲ್ಲಿ ದಾಖಲಾಗಿರುವ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಶಿಕ್ಷಕರನ್ನು ಲೆಕ್ಕಾಚಾರ ಮಾಡಲಾಗಿದೆ.

ಪ್ರಸ್ತುತ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ನಿಗದಿಪಡಿಸಲಾಗಿರುವ ಮೂಲ ವೇತನ ರೂ. 25800-00 ಆಗಿದ್ದು (ವೇತನ ಶ್ರೇಣಿ 25800 - 51400) ಈ ಕೆಳಕಂಡಂತೆ ಅಂದಾಜು ಲೆಕ್ಕಾಚಾರ ಮಾಡಲಾಗಿದೆ.

| ಕ್ರ ಸಂ. | ವಿವರ | ಮೊಬಲಗು ರೂಗಳಲ್ಲಿ |
|---|---|---|
| 1) | ಮೂಲ ವೇತನ | 25,800-00 |
| 2) | ತುಟ್ಟಿಭತ್ಯೆ (ಶೇ 11.25) | 2,903-00 |
| 3) | ಮನೆ ಬಾಡಿಗೆ ಭತ್ಯೆ (ಸರಾಸರಿ ಶೇ 10 ರಂತೆ ಅಂದಾಜಿಸಲಾಗಿದೆ) | 2,580-00 |
| 4) | ನಗರ ಪರಿಹಾರ ಭತ್ಯೆ (ಸರಾಸರಿ ಅಂದಾಜಿಸಲಾಗಿದೆ) | 450-00 |
| 5) | ಒಂದು ವರ್ಷದಲ್ಲಿ ಹೆಚ್ಚಾಗಬಹುದಾದ ತುಟ್ಟಿಭತ್ಯೆ (ಶೇ 8 ಎಂದು ಹಿಂದಿನ ತುಟ್ಟಿಭತ್ಯೆ ಮಂಜೂರಾತಿ ಆಧಾರದ ಮೇಲೆ ಅಂದಾಜಿಸಲಾಗಿದೆ) | 2,064-00 |
| | ಒಟ್ಟು ಒಂದು ತಿಂಗಳಿಗೆ ಅಂದಾಜು ವೇತನ | 33,797-00 |
| | 12 ತಿಂಗಳಿಗೆ ಅಂದಾಜು ಬೇಕಾಗಿರುವ ವೇತನ | 4,05,564-00 |
| 6) | ಗಳಿಕೆ ರಜೆ ನಗದೀಕರಣ 10 ದಿನಗಳಿಗೆ | 11,266-00 |
| | ಒಟ್ಟು ಒಬ್ಬ ಪ್ರಾಥಮಿಕ ಶಿಕ್ಷಕರಿಗೆ ಒಂದು ವರ್ಷಕ್ಕೆ ಬೇಕಾಗಿರುವ ಅಂದಾಜು ವೇತನ | 4,16,820-00 |
| | Rounded off | 4,17,000-00 |

ಒಬ್ಬ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಿಕ್ಷಕರಿಗೆ ಒಂದು ವರ್ಷಕ್ಕೆ ರೂ. 4,17,000-00 ಎಂದು ಅಂದಾಜಿಸಲಾಗಿದೆ.

**ಪ್ರೌಢ ಶಾಲಾ ಶಿಕ್ಷಕರ ಲೆಕ್ಕಾಚಾರ ಈ ಕೆಳಕಂಡಂತೆ ಪರಿಗಣಿಸಿದೆ.**

1) ಪ್ರತಿ ಪ್ರೌಢ ಶಾಲೆಯಲ್ಲಿ 8 ರಿಂದ 10ನೇ ತರಗತಿಯಲ್ಲಿ 75ಕ್ಕಿಂತ ಹೆಚ್ಚು ದಾಖಲಾತಿ ಹೊಂದಿರುವ ಮತ್ತು 150 ಕ್ಕಿಂತ ಕಡಿಮೆ ದಾಖಲಾತಿ ಹೊಂದಿರುವ ಶಾಲೆಗಳಿಗೆ 3+1 ಶಿಕ್ಷಕರನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.
2) ಪ್ರತಿ ಪ್ರೌಢ ಶಾಲೆಯಲ್ಲಿ 8 ರಿಂದ 10ನೇ ತರಗತಿಯಲ್ಲಿ 150ಕ್ಕಿಂತ ಹೆಚ್ಚು ದಾಖಲಾತಿ ಹೊಂದಿರುವ ಶಾಲೆಗಳಿಗೆ 6+1 ಶಿಕ್ಷಕರನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.
3) ಪ್ರತಿ ಪ್ರೌಢ ಶಾಲೆಯಲ್ಲಿ 8 ರಿಂದ 10ನೇ ತರಗತಿಯಲ್ಲಿ 75ಕ್ಕಿಂತ ಕಡಿಮೆ ದಾಖಲಾತಿ ಹೊಂದಿರುವ ಶಾಲೆಗಳಿಗೆ 2 ಶಿಕ್ಷಕರನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಕ್ರಮ ಸಂಖ್ಯೆ 1 ರಿಂದ 3ರ ವರೆಗಿನ ಸಂಖ್ಯೆಗಳನ್ನಾಧರಿಸಿ 1995 ರಿಂದ 2019ರ ವರೆಗೆ ಕನ್ನಡ ಮಾಧ್ಯಮದ ಪ್ರೌಢ ಶಾಲೆಯಲ್ಲಿ ದಾಖಲಾಗಿರುವ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಶಿಕ್ಷಕರನ್ನು ಲೆಕ್ಕಾಚಾರ ಮಾಡಲಾಗಿದೆ. ವಿವರ ಕೆಳಕಂಡಂತಿದೆ.

ಪ್ರಸ್ತುತ ಪ್ರೌಢ ಶಾಲಾ ಶಿಕ್ಷಕರಿಗೆ ನಿಗದಿಪಡಿಸಲಾಗಿರುವ ಮೂಲ ವೇತನ ರೂ. 33,450-00 ಆಗಿದ್ದು (ವೇತನ ಶ್ರೇಣಿ 33450 - 62600) ಈ ಕೆಳಕಂಡಂತೆ ಅಂದಾಜು ಲೆಕ್ಕಾಚಾರ ಮಾಡಲಾಗಿದೆ

| ಕ್ರ ಸಂ. | ವಿವರ | ಮೊಬಲಗು ರೂಗಳಲ್ಲಿ |
|---|---|---|
| 1) | ಮೂಲ ವೇತನ | 33,450-00 |
| 2) | ತುಟ್ಟಿಭತ್ಯೆ (ಶೇ 11.25) | 3,763-00 |
| 3) | ಮನೆ ಬಾಡಿಗೆ ಭತ್ಯೆ (ಸರಾಸರಿ ಶೇ 10 ರಂತೆ ಅಂದಾಜಿಸಲಾಗಿದೆ) | 3,345-00 |
| 4) | ನಗರ ಪರಿಹಾರ ಭತ್ಯೆ (ಸರಾಸರಿ ಅಂದಾಜಿಸಲಾಗಿದೆ) | 450-00 |
| 5) | ಒಂದು ವರ್ಷದಲ್ಲಿ ಹೆಚ್ಚಾಗಬಹುದಾದ ತುಟ್ಟಿಭತ್ಯೆ (ಶೇ 8 ಎಂದು ಹಿಂದಿನ ತುಟ್ಟಿಭತ್ಯೆ ಮಂಜೂರಾತಿ ಆಧಾರದ ಮೇಲೆ ಅಂದಾಜಿಸಲಾಗಿದೆ) | 2,676-00 |
| | ಒಟ್ಟು ಒಂದು ತಿಂಗಳಿಗೆ ಅಂದಾಜು ವೇತನ | 43,684-00 |
| | 12 ತಿಂಗಳಿಗೆ ಅಂದಾಜು ಬೇಕಾಗಿರುವ ವೇತನ | 5,24,208-00 |
| 6) | ಗಳಿಕೆ ರಜೆ ನಗದೀಕರಣ 10 ದಿನಗಳಿಗೆ | 14,561-00 |
| | ಒಟ್ಟು ಒಬ್ಬ ಪ್ರೌಢ ಶಿಕ್ಷಕರಿಗೆ ಒಂದು ವರ್ಷಕ್ಕೆ ಬೇಕಾಗಿರುವ ಅಂದಾಜು ವೇತನ | 5,38,769-00 |
| | Rounded off | 5,39,000-00 |

ಒಬ್ಬ ಪ್ರೌಢ ಶಾಲಾ ಶಿಕ್ಷಕರಿಗೆ ಒಂದು ವರ್ಷಕ್ಕೆ ರೂ. 5,39,000-00 ಎಂದು ಅಂದಾಜಿಸಲಾಗಿದೆ.

ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಒಟ್ಟಾರೆ ಒಂದು ವರ್ಷಕ್ಕೆ ಅಂದಾಜು ಮಾಡಲಾಗಿರುವ ಅನುದಾನ ಈ ಕೆಳಕಂಡಂತಿರುತ್ತದೆ.

| Sl. No. | Year | No. of Primary and Upper Primary schools | No. of Primary teachers | Estimated Budget per teacher per Annuam (4,17,000-00* Col No 3) (In Lakhs.) | No. of Upper Primary teachers | Estimated Budget per teacher per Annuam (4,17,000-00* Col.No 6) (In Lakhs.) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1) | 1995-2000 | 685 | 1188 | 4953.96 | 1462 | 6096.54 |
| 2) | 2001-2005 | 708 | 1150 | 4795.50 | 1198 | 4995.66 |
| 3) | 2006-2010 | 730 | 1194 | 4978.98 | 1068 | 4453.56 |
| 4) | 2011-2015 | 951 | 1490 | 6213.30 | 812 | 3386.04 |
| 5) | 2016-Dec-2019 | 3338 | 5956 | 24836.52 | 4138 | 17255.46 |
| | **Total** | **6412** | 10978 | 45778.26 | **8678** | **36187.26** |

**ಪ್ರೌಢ ಶಾಲಾ ಶಿಕ್ಷಕರಿಗೆ ಒಟ್ಟಾರೆ ಒಂದು ವರ್ಷಕ್ಕೆ ಅಂದಾಜು ಮಾಡಲಾಗಿರುವ ಅನುದಾನ ಈ ಕೆಳಕಂಡಂತಿರುತ್ತದೆ.**

| Sl. No | Year | No of Secondary Schools | No. of teachers | Estimated Budget per teacher per Annuam (5,39,000-00* Col.No 4) (In Lakhs.) |
|---|---|---|---|---|
| 1 | 2 | 3 | 4 | 5 |
| 1) | 1995-2000 | 211 | 1541 | 8305.99 |
| 2) | 2001-2005 | 121 | 1224 | 6597.36 |
| 3) | 2006-2010 | 130 | 1073 | 5783.47 |
| 4) | 2011-2015 | 93 | 1227 | 6613.53 |
| 5) | 2016- Dec-2019 | 434 | 6966 | 37546.74 |
| | **Total** | 989 | 12031 | **64847.09** |

ಮೇಲ್ಕಂಡ ವಿವರಗಳಂತೆ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಅಂದಾಜು ಒಂದು ವರ್ಷಕ್ಕೆ 81965.52 ಲಕ್ಷಗಳಾಗುತ್ತದೆ. ಹಾಗೂ ಪ್ರೌಢ ಶಾಲಾ ಶಿಕ್ಷಕರಿಗೆ ಅಂದಾಜು ಒಂದು ವರ್ಷಕ್ಕೆ 64847.09 ಲಕ್ಷಗಳಾಗುತ್ತದೆ.

ಈ ಮೇಲ್ಕಂಡ ಅಂದಾಜನ್ನು ವಿದ್ಯಾರ್ಥಿಗಳ ಸಾಧನೆ ಜಾಡೀಕರಣ ವ್ಯವಸ್ಥೆ (Students Achievement Tracking System-SATS)ನಲ್ಲಿ 2019–20ನೇ ಸಾಲಿನಲ್ಲಿ ಇಂದೀಕರಿಸಲಾಗಿರುವ ಮಾಹಿತಿಯ ಅನುಸಾರ ಸಿದ್ಧಪಡಿಸಲಾಗಿದೆ. ಆಯಾ ವರ್ಷಗಳಲ್ಲಿ ಮೇಲಿನಂತೆ ಪ್ರಾಥಮಿಕ. ಹಿರಿಯ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ನಡೆಯುತ್ತಿರುವ ಬಗ್ಗೆ ದೃಢೀಕರಿಸಿಕೊಳ್ಳಲು ನಿಖರ ಮಾಹಿತಿಯನ್ನು ಆಯಾ ಜಿಲ್ಲಾ ಉಪನಿರ್ದೇಶಕರಿಂದ ಪಡೆದು ಕ್ರಮ ಕೈಗೊಳ್ಳುವುದು ಸೂಕ್ತವೆಂದು ಅಭಿಪ್ರಾಯಿಸಲಾಗಿದೆ.

**ಪೂರಕ ದಾಖಲೆಗಳು ಈ ಕೆಳಕಂಡಂತಿದೆ.**

1) 2018ರ ಪ್ರಾಥಮಿಕ ಶಾಲಾ ಶಿಕ್ಷಕರ ಪರಿಷ್ಕೃತ ವೇತನ ಶ್ರೇಣಿಗಳು
2) 2018ರ ಪ್ರೌಢ ಶಾಲಾ ಶಿಕ್ಷಕರ ಪರಿಷ್ಕೃತ ವೇತನ ಶ್ರೇಣಿಗಳು
3) 2018ರ ಪರಿಷ್ಕೃತ ವೇತನ ಶ್ರೇಣಿಯಂತೆ ಒಂದು ಮಾದರಿ ಪತ್ರ